# ಬರಿ'ಹಿಕ್' ಎಂದು ಹೇಳು!

## ಟರ್ಕಿಯ ಜಾನಪದ ಕತೆ

ಲೇಃ ಬಾರ್ಬರಾ ಕೇ ವಾಕರ
ಚಿತ್ರಗಳುಃ ಡಾನ ಬೋಲೋನಿಜ್

ಕನ್ನಡಕ್ಕೆಃ ಪ್ರಭಾಕರ ನಾನಾವಟಿ



ಒಂದಾನೊಂದು ಕಾಲದಲ್ಲಿ –ಅಂದರೆ ಎರಡನೆ ಕಾಲದಲ್ಲಿ ಅಲ್ಲ- ಪರಮೇಶ್ವರನು ಹುಟ್ಟಿಸಿದ ಲೆಕ್ಕಕ್ಕೆ ಬರದಷ್ಟು ಪ್ರಾಣಿಗಳೆಲ್ಲ ಈ ಭೂಮಿಯ ಮೇಲಿದ್ದವು. ಆ ಕಾಲದಲ್ಲಿ  ಪ್ರಾಣಿಗಳಿಗೆಲ್ಲ ಹೆಚ್ಚು ಮಾತಾಡಿದರೆ ಪಾಪ ಮಾಡಿದಂತೆನ್ನಿಸುತ್ತಿತ್ತು. ಇಂತಹ ದಿನಗಳಲ್ಲಿ ಒಂದು ಹಳ್ಳಿಯಲ್ಲಿ ಹಸನ ಎಂಬ ಸರಳ ಮನದ  ಒಬ್ಬ ಹುಡುಗ ಒಡೆಯನ ಸೇವಕನಾಗಿ ಇರುತ್ತಿದ್ದನು.





ಒಂದು ದಿನ ಅವನ ಒಡೆಯ "ಹಸನ, ಈ ದುಡ್ಡು ತೆಗೆದುಕೋ ಮತ್ತು ಮಾರುಕಟ್ಟಗೆ ಹೋಗಿ ಉಪ್ಪು ತೆಗೆದುಕೊಂಡು ಬಾ “ ಎಂದು ಆದೇಶಿಸಿದನು. ಹಸನ ದುಡ್ಡನ್ನು ಕೈಯಲ್ಲಿ ತೆಗೆದುಕೊಂಡು ತನ್ನ ಚೀಲದಂತಹ ಪಾಕೆಟ್ಟಿನಲ್ಲಿ ತುರುಕಿದನು.  "ಉಪ್ಪು, ಉಪ್ಪು, ಇದನ್ನು ಹೇಗೆ ನೆನಪಿನಲ್ಲಿ ಇಡಲಿ?" ಎಂದು ಯೋಚಿಸತೊಡಗಿದನು. ಪಾಪ, ಆತನಿಗೆ ಒಂದು ಕ್ಷಣದ ಹಿಂದಿನ ಸಂಗತಿ ಕೂಡ ನೆನಪಿನಲ್ಲಿ ಇರುತ್ತಿರಲಿಲ್ಲ. ಈ ಬಾರಿ ಅವನು ಹೇಳಿದ್ದನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದಾಗಿ ನಿರ್ಧರಿಸಿದ್ದನು. “ನನಗೆ ಗೊತ್ತು, ಇದನ್ನೇ ಹತ್ತಾರು ಸಲ ಅನ್ನುತ್ತ ಹೋದರೆ ಅದು ನೆನಪಿನಲ್ಲಿ ಉಳಿಯುತ್ತದೆ. ನಾನು ಮಾರುಕಟ್ಟೆಯನ್ನು ತಲುಪುವವರೆಗೆ ಈ ಪದವನ್ನು ಮತ್ತೆ ಮತ್ತೆ ಹೇಳುತ್ತೇನೆ.  "

ಹಾಸನನ ಹಳ್ಳಿಯಲ್ಲಿ ಉಪ್ಪಿಗೆ 'ಹಿಕ್' ಎದೆನ್ನುತ್ತಿದ್ದರು.  ಧೂಳು ತುಂಬಿದ ಹಾದಿಯಲ್ಲಿ ತನ್ನ ಬೂಟುಗಳನ್ನು ಎಳೆದುಕೊಂಡು, ಹಸನ ಮಾರುಕಟ್ಟೆಗೆ ಹೋಗುವ ದಾರಿಗುಂಟ "ಹಿಕ್, ಹಿಕ್, ಹಿಕ್," ಎಂದು ಹೇಳತೊಡಗಿದನು. "ಹಿಕ್, ಹಿಕ್, ಹಿಕ್" ಎಂದೆನ್ನುತ್ತಲೇ ಆತ ಸೇತುವೆಯ ಕಳಗೆ ಓರ್ವ ಮೀನುಗಾರನು ಮೀನು ಹಿಡಿಯುತ್ತಿದ್ದದ್ದನ್ನು ನೋಡುತ್ತ ನಿಂತನು. ತನ್ನ ಕೆಲಸ ಮರೆಯಬಾರದೆಂದು ಅವನ ಬಾಯಿ "ಹಿಕ್, ಹಿಕ್, ಹಿಕ್" ಎಂದು ಅನ್ನುತ್ತಿತ್ತು.

ಆದರೇ ಟರ್ಕಿಯ ಕೆಲ ಪ್ರದೇಶದಲ್ಲಿ ಹಿಕ್ ಎಂದರೆ 'ಏನೂ ಇಲ್ಲ' ಎಂದರ್ಥ. ಹಸನ ಒಟಗುಟ್ಟುತ್ತಿದ್ದಾಗ ಮೀನುಗಾರನ ಬಲೆಯಲ್ಲಿ ಮೀನುಗಳೇ ದೊರೆಯಲಿಲ್ಲ. ಕದ್ದೆತ್ತಿ ನೋಡಿದಾಗ ಹಸನ "ಹಿಕ್ ಹಿಕ್" ಎನ್ನುತ್ತಿದ್ದದ್ದು ಅವನಿಗೆ ಕೇಳಿಸಿತು. ಮೀನುಗಾರನಿಗೆ ಬಹಳ ಸಿಟ್ಟು ಬಂದಿತು. ಸಿಟ್ಟಿನಲ್ಲಿಯೇ "ನೀನು ಹೀಗೆ ಹೇಳಕೂಡದು." ಎಂದು ಜಬರಿಸಿದನು.
ಹಸನನಿಗೆ ಆಶ್ಚರ್ಯವಾಯಿತು.



“ಹಾಗಿದ್ದರೆ ಏನು ಹೇಳಲಿ?” ಹಸನನ ಸವಾಲು.

ಮೀನುಗಾರನು “ಇನ್ನೂ ನಾಲ್ಕಾರು ದೊರೆಯಲಿ.” ಎಂದು ಹೇಳಬೇಕೆಂದು ತಿಳಿಸಿದನು.

ಹಸನ ಕೂಡಲೇ ಒಪ್ಪಿಕೊಂಡನು.

ಹಾಗು “ಇನ್ನೂ ನಾಲ್ಕಾರು ದೊರೆಯಲಿ, ಇನ್ನೂ ನಾಲ್ಕಾರು ದೊರೆಯಲಿ,” ಎಂದು ಹೇಳತೊಡಗಿದನು.





ಮೀನುಗಾರನು ಹೇಳಿದಂತೆ “ಇನ್ನೂ ನಾಲ್ಕಾರು ದೊರೆಯಲಿ, ಇನ್ನೂ ನಾಲ್ಕಾರು ದೊರೆಯಲಿ.” ಎಂದೆನ್ನುತ್ತ ಹಸನ ಮುಂದೆ ನಡೆದನು. ಇದನ್ನು ಮರೆಯಕೂಡದೆಂದು ಮತ್ತೇ ಮತ್ತೇ ಹೇಳುತ್ತಲೇ ಇದ್ದನು. ಹೀಗೇ ಹೇಳುವಾಗ ಉಸಿರು ಗಟ್ಟಿದರೂ ಆತನು ಹೇಳುವದನ್ನು ನಿಲ್ಲಿಸಲಿಲ್ಲ. “ಇನ್ನೂ ನಾಲ್ಕಾರು ದೊರೆಯಲಿ, ಇನ್ನೂ ನಾಲ್ಕಾರು ದೊರೆಯಲಿ.” ಎಂಬ ಜಪ ನಿಲ್ಲಲಿಲ್ಲ. ಕಾಲಿನಲ್ಲಿಯ ಬೂಟುಗಳನ್ನು ಧೂಳಿನಲ್ಲಿ ಎಳೆಯುತ್ತ ಮುಂದೆ ಸಾಗಿದನು.

ಆತನು “ದೇವರೆ, ಆತ್ಮಕ್ಕೆ ಆಶೀರ್ವದಿಸು.” ಎಂದು ಹೇಳಬೇಕೆಂದು ಹಸನನನ್ನು ಸಮಜಾಯಿಸಿದನು. “ಸರಿ, ದೇವರೆ ಆತ್ಮಕ್ಕೆ ಆಶೀರ್ವದಿಸು , ದೇವರೆ ಆತ್ಮಕ್ಕೆ ಆಶೀರ್ವದಿಸು” ಎಂದು ನೆನಪಿನಲ್ಲಿಡಲು ಪ್ರಯತ್ನಿಸತೊಡಗಿದನು. ಇನ್ನು ಮರೆಯುವದಿಲ್ಲವೆಂದು ಖಚಿತವಾದಮೇಲೆ  ಹಸನನು ಮಾರುಕಟ್ಟೆಯ ದಾರಿಯನ್ನು ಹಿಡಿದನು.





ದಾರಿಯಲ್ಲಿ ಆತ ಹೋಗುತ್ತಿದ್ದಾಗ  ಅಲ್ಲಿಂದ ಒಂದು ಪ್ರೇತ ಯಾತ್ರೆ ಹೋಗುತ್ತಿತ್ತು. ಆದರೆ ಹಸನ ತನ್ನ “ಇನ್ನೂ ನಾಲ್ಕಾರು ದೊರೆಯಲಿ, ಇನ್ನೂ ನಾಲ್ಕಾರು ದೊರೆಯಲಿ.” ಅನ್ನುವದನ್ನು ನಿಲ್ಲಿಸಲಿಲ್ಲ.

ಆ ದುಃಖಿಸುವವರ ಗುಂಪಿನಲ್ಲಿಯ ನೆಂಟರು ಕಳವಳಗೊಂಡರು. ಅವರಲ್ಲಿ ಒಬ್ಬ ಹಸನ ಹತ್ತಿರ ಬಂದು “ಮಗು, ಹೀಗೇ ಹೇಳಕೂಡದು.” ಎಂದು ಜಬರಿಸಿದನು.

ಹಸನನಿಗೆ ಸೋಜಿಗವಾಯಿತು.

“ಹಾಗಾದರೆ ಏನು ಹೇಳಬೇಕು?” ಹಸನನ ಮರು ಪ್ರಶ್ನೆ.

ಹಸನ ದಾರಿಯಿಂದ , “ದೇವರೆ ಆತ್ಮಕ್ಕೆ ಆಶೀರ್ವದಿಸು, ದೇವರೆ ಆತ್ಮಕ್ಕೆ ಆಶೀರ್ವದಿಸು” ಎಂದು ಒಟಗುಡುತ್ತಿದ್ದಾಗ ಒಮ್ಮೆಲೆ ಅವನ ಮೂಗಿಗೆ ಹೊಲಸು ನಾತ ಬಂದದ್ದು ತಿಳಯಿತು.

ಸುತ್ತಮುತ್ತಲು ನೋಡುತ್ತ ಈ ವಾಸನೆ ಎಲ್ಲಿಂದ ಬಂದಿರಬಹುದೆಂದು ಯೋಚಿಸುತ್ತಿದ್ದಾಗ ಅವನು ಕೆಳಗೆ ನೋಡಿದನು. ಅಲ್ಲಿ ಅವನಿಗೆ ಒಂದು ಸತ್ತ ಮೀನು ಕಾಣಿಸಿತು. ಅದರಿಂದಲೇ ಈ ನಾತ ಬಂದಿದೆ ಎಂದು ಆತ ಲೆಕ್ಕ ಹಾಕಿದನು.





ಆಗಲೂ ಕೂಡ ಅವನ ಬಾಯಿಯಲ್ಲಿ ಠದೇವರೆ ಆತ್ಮಕ್ಕೆ ಆಶೀರ್ವದಿಸು, ದೇವರೆ ಆತ್ಮಕ್ಕೆ ಆಶೀರ್ವದಿಸು.” ಎಂಬುದು ಇದ್ದವು.

ಅಷ್ಟರಲ್ಲಿ ಒಬ್ಬ ದೊಡ್ಡ ದೇಹದ ಮನುಷ್ಯ ಅಲ್ಲಿಂದ ಹೋಗುತ್ತಿದ್ದನು. ಅವನಿಗೂ ವಾಸನೆ ಬರುತ್ತಿತ್ತು. ಆದರೆ ಹಸನ ಮಾತ್ರ “ದೇವರೆ ಆತ್ಮಕ್ಕೆ ಆಶೀರ್ವದಿಸು, ದೇವರೆ ಆತ್ಮಕ್ಕೆ ಆಶೀರ್ವದಿಸು” ಅನ್ನುತ್ತಿದ್ದನ್ನು ಕೇಳಿ ರೊಚ್ಚಿಗೆದ್ದನು. “ಏ ಮಂಕನೆ, ನಿನಗೇನು ಹುಚ್ಚು ಹಿಡಿದಿದೆಯೋ? ಹಾಗೆ ದೇವರೆ ಆತ್ಮಕ್ಕೆ ಆಶೀರ್ವದಿಸು ಎಂದು ಸತ್ತ ಮೀನಿಗೆ ಹೇಳಕೂಡದು.” ಎಂದು ಸಿಟ್ಟಿನಿಂದ ಹೇಳಿದನು. ಹಸನನಿಗೆ ಮತ್ತೊಮ್ಮೆ ಅಚ್ಚರಿಯಾಯಿತು. “ನಾನು ಹಾಗೆ ಹೇಳಲಾರದೆ ಏನು ಹೇಳಬೇಕು?” ಎಂದು ಮರುಪ್ರಶ್ನೆ ಮಾಡಿದನು.

“ಎಂತಹ ಗಬ್ಬು ವಾಸನೆ ಛೀ,ಛೀ ಎಂದು ಹೇಳು.”ಎಂದು ಹಸನನನ್ನು ಜಬರಿಸಿದನು.

ಹಸನನ ಮೂಗು ಕೂಡ ಇದಕ್ಕೆ ಒಪ್ಪಿತು.

“ಸರಿ, ಎಂತಹ ಗಬ್ಬು ವಾಸನೆ ಛೀ,ಛೀ.” ಎಂದು ಹೇಳುತ್ತೇನೆ. ಹಸನನ ಒಪ್ಪಿಗೆ.

ಈ ರೀತಿಯಾಗಿ ಅದನ್ನು ನೆನಪಿನಲ್ಲಿಡಲು, “ಎಂತಹ ಗಬ್ಬು ವಾಸನೆ ಛೀ,ಛೀ , ಎಂತಹ ಗಬ್ಬು ವಾಸನೆ ಛೀ,ಛೀ..”ಎಂದು ನಾಲ್ಕಾರು ಸಾರಿ ಹೇಳಿದನು. “ಇನ್ನೇನು ಮರೆಯಲಾರೆ.” ಎಂದೆನ್ನುತ್ತ ಮುನ್ನಡೆದನು.



ಆತ ಸ್ವಲ್ಪ ಮುಂದೆ ಹೋದಾಗ ಮೂವರು ಮಹಿಳೆಯರು ಸ್ನಾನದ ಮನೆಯಿಂದ ಹೊರಬಿದ್ದರು. ಅಂದದ ಉಡುಪಿನಲ್ಲಿಯ ಮಹಿಳೆಯರನ್ನು ಕಂಡರೂ ಹಸನ “ಎಂತಹ ಗಬ್ಬು ವಾಸನೆ ಛೀ,ಛೀ.” ಎಂದು ಬಡಬಡಿಸುತ್ತಿದ್ದನು.





ಅವರೆಲ್ಲರಿಗೂ ಬಹಳ ಸಿಟ್ಟು ಬಂತು. ಮೈಮೇಲಿನ ಟವೆಲ್ಲನ್ನು ಬೀಸಾಕಿ "ನಿನಗೇನು ಇಷ್ಟು ಸೊಕ್ಕು?" ಎಂದು ಬೈಯುತ್ತ "ಇದೇ ಈಗ ನಾವು ಹಮಾಮಖಾನೆಯಿಂದ ಹೊರಬಂದಿದ್ದೇವೆ. ಆದರೂ ನೀನು ಎಂತಹ ಗಬ್ಬು ವಾಸನೆ ."ಎನ್ನುತ್ತಿದ್ದಿ.

ಹಸನ ನಿಂತಲ್ಲಿಯೇ ನಡುಗಿದನು. "ಹಾಗಿದ್ದರೆ ಏನು ಹೇಳಲಿ?" ಎಂದು ಅಳುದನಿಯಲ್ಲಿ ಕೇಳಿದನು

ಅವರೆಲ್ಲರೂ ಒಂದೇ ದನಿಯಲ್ಲಿ "ಎಷ್ಟು ಚೆಂದ ಎಷ್ಟು ಅಂದ." ಎಂದು ಹೇಳಬೇಕೆಂದು ಹಸನನನ್ನು ಬೆದರಿಸಿದರು.

ಮೂವರು ನಗುನಗುತ್ತ ಹಸನನನ್ನು ಅಲ್ಲಿಯೇ ಬಿಟ್ಟು ಮುಂದೆ ಹೋಗತೊಡಗಿದರು.

ಸರಿ, ಇದನ್ನೇ ಹೇಳುತ್ತೇನೆ ಎಂದಂದು “ಎಷ್ಟು ಚೆಂದ ಎಷ್ಟು ಅಂದ, ಎಷ್ಟು ಚೆಂದ ಎಷ್ಟು ಅಂದ” ಎಂದು ಒಟಗುಡತೊಡಗಿದನು.

“ಈಗಲೇ ಹೇಳು.” ಒಬ್ಬಳು ಒದರಿದಳು.



ಹಸನ ತಲೆ ತಗ್ಗಿಸಿ ಅವರು ಹೇಳಿದ್ದನ್ನು ಹೇಳುತ್ತ ಅವರನ್ನು ನಮಸ್ಕರಿಸಿದನು.

ಮಹಿಳೆಯರು ಮುಗುಳು ನಗುತ್ತ ತಮ್ಮ ದಾರಿಯನ್ನು ಹಿಡಿದು ಹೊರಟು ಹೋದರು.

ಹಸನ ಧೂಳಿನಲ್ಲಿ ಕಾಲೆಳೆಯುತ್ತ ಮತ್ತು ಅವರು ಹೇಳಿದ್ದನ್ನು “ಎಷ್ಟು ಚೆಂದ, ಎಷ್ಟು ಅಂದ.” ಎಂದೆನ್ನುತ್ತ ಮಾರುಕಟ್ಟೆಯ ದಾರಿ ಹಿಡಿದನು.



ಆತನು ಬಾಯಿಯಿಂದ “ಎಷ್ಟು ಎಷ್ಟು ಅಂದ.” ಎಂದ್ಹೇಳುತ್ತ ಮುಂದೆ ಮುಂದೆ ಹೋಗತೊಡಗಿದನು. ಆಗ ಅವನ ದಾರಿಯಲ್ಲಿ ಇಬ್ಬರೂ ಧಡೂತಿಗಳು ಜಗಳವಾಡುತ್ತಿದ್ದರು. ಮತ್ತು ಅವರ ಸುತ್ತಲು ಜನರು ನೆರೆದಿದ್ದರು. ಹಸನ ಕೂಡ ಆ ಹೋರಾಟವನ್ನು ನೋಡುತ್ತ ನಿಂತನು. ಆದರೆ ಬಾಯಿಯಿಂದ “ಎಷ್ಟು ಚೆಂದ, ಎಷ್ಟು ಅಂದ.” ಎಂದೆನ್ನುತ್ತಲೇ ಇದ್ದನು.
ಮೊದಲನೆಯವ ಎರಡನೆಯವನಿಗೆ ಪೆಟ್ಟು ಕೊಟ್ಟಾಗ ಕೂಡ ಹಸನನ “ಎಷ್ಟು ಚೆಂದ, ಎಷ್ಟು ಅಂದ.” ಎನ್ನುವದು ಎಲ್ಲರಿಗೂ ಕೇಳಿಸುತ್ತಿತ್ತು. ಎರಡನೆಯವನು ಹೊಡೆದಾಗ ಕೂಡ ಹಸನ ಹಾಗೆಯೇ ಹೇಳುವದನ್ನು ಕೇಳಿ ಇವರಿಬ್ಬರು ತಮ್ಮ ಜಗಳವನ್ನು ನಿಲ್ಲಿಸಿ  ಹಸನನನ್ನು ಥಳಿಸ ತೊಡಗಿದರು. ಪಾಪ, ಹಸನನಿಗೆ ಏನು ನಡೆದಿದೆಯೋ ಅದೇ ಗೋತ್ತಾಗಲಿಲ್ಲ. “ನೀನು ಹೀಗೆ ಹೇಳಕೂಡದು.”. ಎಂದು ಒಬ್ಬರು ಹೇಳಿದರು.







“ನಾನು ಏನು ಹೇಳಬೇಕು?” ಹಸನ ಕೂಗಿ ಜೋರು ದನಿಯಲ್ಲಿ ಕೇಳಿದನು.

“ಹಿರಿಯರೇ, ಹೀಗೆ ಜಗಳಾಡಬಾರದು”. ಎಂದು ಹೇಳೆಂದು ಒಬ್ಬನು ಕನಿಕರಪಟ್ಟು ಹೇಳಿದನು.

ಅವರು ಅನ್ನಲು ಹೇಳಿದ್ದನ್ನೇ ಮತ್ತೇ ಮತ್ತೇ ಹೇಳುತ್ತ .ಹಸನ ಮುಂದೆ ಹೋಗತೊಡಗಿದನು. “ಹಿರಿಯರೇ, ಹೀಗೆ ಜಗಳಾಡಬಾರದು, ಹಿರಿಯರೇ, ಹೀಗೆ ಜಗಳಾಡಬಾರದು.” ಎಂದು ಆತನು ಒಟಗುಡಿಸುತ್ತಿದ್ದನು. ಅದನ್ನು ಮರೆಯಬಾರದೆಂದು ಹತ್ತಾರು ಸಾರೆ ಪದೇ ಪದೇ ಹೇಳತೊಡಗಿದನು.



ಮಾರುಕಟ್ಟೆಗೆ ಹೋಗುವ ಬೀದಿಯಲ್ಲಿ ಆಗ ಎರಡು ನಾಯಿಗಳು ಬೊಗಳಿ ಬೊಗಳಿ ಕಚ್ಚಾಡುತ್ತಲಿದ್ದವು. ಹಸನ ಮಾತ್ರ ನಾಯಿಗಳು ಕಚ್ಚಾಡುವದನ್ನು ನೋಡುತ್ತ “ಹಿರಿಯರೇ ಹೀಗೆ ಮಾಡಬೇಡಿ.” ಎಂದು ಬಾಯಿಯಿಂದ ಅನ್ನುತ್ತಲೇ ಇದನ್ನು ಕೇಳಿ ಅಲ್ಲಿಯೇ ನಿಂತಿದ್ದ ಒಬ್ಬನು “ಏ ಹುಚ್ಚ, ಹೀಗೆ ಯಾರಾದರೂ ಅನ್ನುತ್ತಾರೆಯೇ?” ಎಂದು ಜಬರಿಸಿದನು.



ಆ ಮನುಷ್ಯನು, "ನೀನು ಹುಚ್ಚನೇ? ಹಾಗೆ ಯಾರಾದರೂ ಹೇಳುತ್ತಾರೆಯೇ. ನೀನು ಹೀಗೆ  ಹೇಳಬಾರದು! "





ಹಸನನಿಗೆ ಬಹು ಆಶ್ಚರ್ಯ. “ಹಾಗಿದ್ದರೆ ಏನು ಹೇಳಲಿ ?”
“ಏ, ನಾಯಿ ದೂರ ಹೋಗು” ಎಂದು ಹೇಳಬೇಕು. “
ಹಸನ ತನ್ನ ದಾರಿಯಲ್ಲಿ ನಡೆಯಲು ಪ್ರಾರಂಭಿಸಿದನು " ಏ, ನಾಯಿ ದೂರ ಹೋಗು, ಏ, ನಾಯಿ ದೂರ ಹೋಗು”  ಎಂದು ಬಡಬಡಿಸುತ್ತ ಹಸನನು ಮಾರುಕಟ್ಟೆಯ ಒಳಗೆ ಪ್ರವೇಶಿಸಿದನು.

ಮಾರುಕಟ್ಟೆಯ ಮೊದಲ ಅಂಗಡಿಯಲ್ಲಿ ಒಬ್ಬ ಚರ್ಮಕಾರನು ಶೂಜ ತಯಾರಿಸುತ್ತಿನು. ಬಾಯಿಯಲ್ಲಿ ತೊಗಲಿನ ತುಂಡನ್ನು ಹಿಡಿದು ಜಗ್ಗುತ್ತಿದ್ದನು. ಹಸನ ಅಂಗಡಿಯ ಮುಂದಿಂದ ಹೋಗುವಾಗ " ಏ, ನಾಯಿ ದೂರ ಹೋಗು .'ಎಂಬುವದನ್ನು ಆತ ಕೇಳಿದನು. ಹಸನನ ಈ ಮಾತು ಕೇಳಿದಾಗ ಚರ್ಮಕಾರನು ಬಹು ಸಿಟ್ಟಿಗೆದ್ದನು. ಅಂಗಡಿಯವನು ರೊಚ್ಚಿಗೆದ್ದು "ನೀನೇ ನಾಯಿ, ನೀನೇ ದೂರ ಹೋಗು." ಎಂದು ಬೈಯ್ಯತೊಡಗಿದನು.

ಹಸನ ಕಕ್ಕಾಬಿಕ್ಕಿಯಾಗಿ ಮೆಲುದನಿಯಲ್ಲಿ "ಸಿಟ್ಟಿಗೇಳಬೇಡಿ, ಯಜಮಾನರೇ. ನಾನು ಏನ್ಹೇಳಬೇಕು ಎಂಬುದನ್ನು ಹೇಳಿ. ಉಪಕಾರವಾಗುವದು." ಎಂದು ಬಿನ್ನವಿಸಿದನು. ಅಂಗಡಿಯವನು ಕನಿಕರಪಟ್ಟು "ಹೀಗೆ ಹೇಳಬಾರದು. ಮಗು. ಬರಿ ಹಿಕ್ ಎಂದು ಹೇಳು. ಅಷ್ಟೇ ಹೇಳಿದರೆ ಸಾಕು ." ಎಂದು ತಿಳಿಸಿ ಹೇಳಿದನು.



"ಓ ಧನ್ಯವಾದಗಳು! ಇದನ್ನೇ ನಾನು ನೆನಪಿನಲ್ಲಿಡಬೇಕಾಗಿತ್ತು."
ಹಸನ್ ಕೂಗಿ ಖುಶಿಯಾಗಿ ಹೇಳಿದನು.
ಹೀಗೆಯೇ ಮುಂದೆ ಹೋಗಿ ಅಂಗಡಿಯಿಂದ ಉಪ್ಪನ್ನು ಕೊಂಡು
ಮರಳಿ ಮನೆಗೆ ಬಂದನು.

